ಡಾ|| ಚೆನ್ನಕ್ಕ ಪಾವಟೆ*

# ಕೂಡ್ಲಿ ಶೃಂಗೇರಿ ಸಂಸ್ಥಾನಕ್ಕೆ ಹಂಡೆ ಪಾಳೆಯಗಾರರ ದಾನ

ವಿಜಯನಗರ ಪಾಳೆಯಗಾರರಲ್ಲಿ ಹಂಡೆ ಮನೆತನ ಮುಖ್ಯವಾದುದು. ಕೃಷ್ಣದೇವರಾಯ ಅಚ್ಯುತರಾಯನ ಕಾಲದಿಂದ ಪ್ರಾರಂಭವಾಗಿ ಆದಿಲಶಾಹಿ ಟಿಪ್ಪು ಕೊನೆಗೆ ಕರ್ನಲ್‌ಮನ್ರೊ, ಗಹಗನ್ ಮುಂತಾದ ಆಂಗ್ಲ ಅಧಿಕಾರಿಗಳ ವರೆಗೆ ಅಧಿಕಾರ ಮುಂದುವರಿಸಿದ ಮನೆತನವಿದು. ಕರ್ನಾಟಕದ ವಿಜಾಪುರ ಜಿಲ್ಲೆಯಲ್ಲಿ ಹುಟ್ಟಿ ಬಳ್ಳಾರಿ ಕುರಗೋಡುಗಳಲ್ಲಿ ವ್ಯಾಪಿಸಿ ಕೊನೆಗೆ ಆಂಧ್ರ ಪರಿಸರದಲ್ಲಿ ನೆಲೆನಿಂತು ಸುಮಾರು ೩೦೦ ವರ್ಷ ಅಧಿಕಾರ ನಿರ್ವಹಿಸಿದ ಪಾಳೆಯಗಾರ ಮನೆತನವಿದು.

"ಶ್ರೀಮನ್ ಮಹಾರಾಜಾಧಿರಾಜ, ಖಂಡೇಯ ಯಶವಂತ, ಪರದಳವಿಭಾಡ, ಅರಿರಾಯಮರ್ದನ" ಎಂಬುದು ಇವರ ಬಿರುದು. ಹಂಡೆ ಅನಂತಪುರ ಕೈಫಿಯತ್ತು ತಿಳಿಸುವಂತೆ ವಿಜಾಪುರ ದೇಶದಲ್ಲಿರುವ ಬಾಗವಾಡಿ ವಿಭಾಗದ ಮುತ್ತಿಗೆ ಮತ್ತು ವಡವಡಿಗೆ ಗ್ರಾಮಗಳಲ್ಲಿದ್ದ ಈ ಮನೆತನದ ಮೂಲಪುರುಷ ಲಕ್ಕಿನಾಯಕ. ಆವನಿಗೆ ಬಾಲದ ಹನುಮಪ್ಪನಾಯಕ ಮತ್ತು ಬಳಗನಾಯಕ ಎಂಬ ಇಬ್ಬರು ಮಕ್ಕಳು. ಹನುಮಪ್ಪನಾಯಕ ನಿಜಾಂ ಬಾದಶಹನನ್ನು ಕೈ ಸೆರೆ ಹಿಡಿದು ರಾಮರಾಯನಿಗೆ ಒಪ್ಪಿಸಿ ಅವರ ಕೃಪೆಯಿಂದ ಮಾಂಡಲಿಕನಾದ. ಆತನ ಪರಾಕ್ರಮಕ್ಕೆ ಮೆಚ್ಚಿದ ರಾಮರಾಯ ಹನುಮಪ್ಪನಿಗೆ ನಂದ್ಯಾಲ, ಬುಕ್ಕರಾಯ ಸಮುದ್ರ, ಧರ್ಮಾವರ, ಕಣೇಕಲ್ಲು, ಬಳ್ಳಾರಿ, ಕುರಗೋಡ ಗ್ರಾಮಗಳನ್ನು ಉಂಬಳಿಯಾಗಿ ಹಾಕಿಕೊಟ್ಟ. ಬಾಲದ ಹನುಮಪ್ಪನಾಯಕನ ಪ್ರಖ್ಯಾತಿ ಕಾಲಾಂತರದಲ್ಲಿ ಬೆಳೆದು ಅವನ ವಂಶಜರು ಬಳ್ಳಾರಿ ಅನಂತಪುರದೆಡೆಗೆ ಚಲ್ಲುವರಿದರೆ ಬಳಗನಾಯಕ ವಂಶಜರು ಮೂಲಸ್ಥಳದಲ್ಲಿಯೇ ಉಳಿದರು.

ಇವರ ಇತಿಹಾಸದ ಪ್ರಮುಖ ಆಕರಗಳಲ್ಲಿ ಬಳ್ಳಾರಿ ಹಾಗೂ ಕುರುಗೋಡ ಕೈಫಿಯತ್ತು ಮುಖ್ಯವಾದವು. ಈ ಮನೆತನಕ್ಕೆ ಸಂಬಂಧಿಸಿದ ಯಾವುದೋ ಒಂದು ತೆಲುಗು ಮೂಲ ಕೃತಿಯನ್ನು ಅವಲಂಬಿಸಿ ಚಾರ್ಲಸ್ ಫಿಲಿಪ್ಸ್ ಬ್ರೌನ್ ರಚಿಸಿದ 'War of the Rajas' ಹೆಸರಿನ ಕೃತಿಯಲ್ಲದೆ ಹಂಡೆ ಮನೆತನದ ಗುರು ಪೀಠವೆನಿಸಿದ ಶ್ರೀಶೈಲದ ನಿಡುಮಾಮಿಡಿ ಪೀಠದ ಕೆಲವು ಚರಿತ್ರೆಗಳು ಇಲ್ಲಿ ಪ್ರಯೋಜಕವೆನಿಸುತ್ತವೆ. ಹಂಡೆ ಮನೆತನದ ಸಮಕಾಲೀನ ತೆಲುಗು ಕೃತಿ ಫುಲ್ಲಕವಿ ವಿರಚಿತ 'ಶ್ರೀಶೈಲ ಪಂಡಿತಾರಾಧ್ಯ ಚರಿತೆ', ಸಿರಿಪಿ ಆಂಜನೇಯಲು ವಿರಚಿತ 'ಕರಿಬಸವಸ್ವಾಮಿ ಕಾವ್ಯ', ನಾಗಸಂದ್ರಂ ವಾಸುದೇವರಾವ್ ವಿರಚಿತ 'ಅನಂತಪುರ ಮಂಡಲ ಚರಿತ್ರ ಕಥಲು' ಕೃತಿ, ಶ್ರೀಶೈಲಪೀಠದರ್ಶನವೆಂಬ ಹೊಸಗನ್ನಡ ಕೃತಿ ಈ ಮನೆತನದ ಬಗೆಗೆ ಸಿಗುವ ತುಂಡು ತುಂಡು ವಿಷಯದ ಆಕರಗಳೆನಿಸಿವೆ.

ಕರ್ನಾಟಕ ಇತಿಹಾಸ ಅಕಾದೆಮಿ ವಿಚಾರ ಸಂಕಿರಣದಲ್ಲಿ ದಾವಣಗೆರೆಯಲ್ಲಿ ಜರುಗಿದ ಸಮ್ಮೇಳನದಲ್ಲಿ "ಬಂಕಾಪುರದಲ್ಲಿ ಹಂಡೆ ಪಾಳೆಯಗಾರರು" ಚಿತ್ರದುರ್ಗದಲ್ಲಿ "ಹಂಡೆ ಪಾಳೆಯಗಾರರ ಮೇಲೆ ಹೊಸ ಬೆಳಕು"

* ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩.

ರಾಯಚೂರಿನಲ್ಲಿ "ಹಂಡೆ ಪಾಳೆಯಗಾರರು : ಒಂದು ವಿಶ್ಲೇಷಣೆ" ಪ್ರಬಂಧಗಳನ್ನು ಮಂಡಿಸಿದ್ದೆ. ನಾನು ಈಗ 'ಕೂಡ್ಲಿ ಶೃಂಗೇರಿ ಸಂಸ್ಥಾನಕ್ಕೆ ಹಂಡೆ ಪಾಳೆಯಗಾರರ ದಾನ' ವಿಷಯದ ಪ್ರಬಂಧವನ್ನು ಮಂಡಿಸುತ್ತಿದ್ದೇನೆ.

ಮೂಲತಃ ಕುರುಬರಾಗಿದ್ದರೂ ಲಿಂಗಧಾರಿಗಳೂ ಆಗಿರುವ ಈ ಹಂಡೆ ಪಾಳೆಯಗಾರರು ಸಿದ್ಧರಾಮನ ಭಕ್ತರು. ಇವರ ಮೊಹರುಗಳ ಮೇಲೆ 'ಸಿದ್ಧರಾಮೇಶ್ವರ' ಎಂಬ ಬರವಣಿಗೆ ಕಂಡುಬರುತ್ತದೆ. ಹಂಡೆ ರಾಮಪ್ಪ ನಾಯಕನ ಗುರು ತೋಂಟದ ಸಿದ್ಧಲಿಂಗೇಶ್ವರ ಸಂಪ್ರದಾಯದ ವಿರಕ್ತಮಠದ ನೀಲಕಂಠ ಸ್ವಾಮಿಗಳು ಎಂದು ಒಂದು ಹಸ್ತಪ್ರತಿ ಪ್ರಶಸ್ತಿ ತಿಳಿಸುತ್ತದೆ. ಹೀಗೆ ವೀರಶೈವ ಪರವಾಗಿದ್ದರೂ ಈ ಪಾಳೆಯಗಾರರು ಕೂಡ್ಲಿ ಶೃಂಗೇರಿ ಸಂಸ್ಥಾನದಲ್ಲಿಯೂ ಭಕ್ತಿಯಿಟ್ಟಿದ್ದರೆಂದು ತಾಮ್ರಪಟಗಳಿಂದ ತಿಳಿದುಬರುತ್ತದೆ.[1]

ಕೂಡ್ಲಿ ಶೃಂಗೇರಿ ಕ್ಷೇತ್ರ ಶಿವಮೊಗ್ಗೆಗೆ ಈಶಾನ್ಯ ದಿಕ್ಕಿನಲ್ಲಿ ೯ ಮೈಲು ದೂರದಲ್ಲಿದೆ. ಪಶ್ಚಿಮ ಘಟ್ಟಗಳಿಗೆ ಸೇರಿದ ಸಹ್ಯಾದ್ರಿಯ ಸಾಲಿನಲ್ಲಿರುವ ವರಾಹಪರ್ವತದಲ್ಲಿ ಹುಟ್ಟಿ ಹರಿದು ಬರುತ್ತಿರುವ ತುಂಗಾ ಮತ್ತು ಭದ್ರಾ ಎಂಬ ಎರಡು ಪವಿತ್ರ ನದಿಗಳು ಕೂಡಲಿ ಗ್ರಾಮದ ಬಳಿ ಸಂಗಮಗೊಳ್ಳುವುದರಿಂದ ಇದೊಂದು ಪುರಾಣ ಪ್ರಸಿದ್ಧ ಕ್ಷೇತ್ರವೆನಿಸಿದೆ. ಶಂಕರಾಚಾರ್ಯರಿಂದ ೪೭ನೆಯವರಾದ ತೃತೀಯ ಶ್ರೀ ನರಸಿಂಹಭಾರತಿ ಸ್ವಾಮಿಗಳು ೧೫೭೬ರಲ್ಲಿ ಮೂಲ ಶೃಂಗೇರಿಯನ್ನು ಬಿಟ್ಟು ಶ್ರೀ ಕೂಡಲಿ ಕ್ಷೇತ್ರದಲ್ಲಿ ನೆಲೆಸಿ ಇಲ್ಲಿಂದಲೇ ಧಾರ್ಮಿಕ ಕಲಾಪ ನಡೆಸಲಾರಂಭಿಸಿದರು. ಈ ಪೀಠವು ಶ್ರೀ ಮಜ್ಜಗದ್ಗುರು ಕೂಡಲಿ ಶೃಂಗೇರಿ ಶಂಕರಾಚಾರ್ಯರ ಮಹಾಸಂಸ್ಥಾನವಾದ ಶ್ರೀ ದಕ್ಷಿಣಾಮ್ನಾಯ ಶಾರದಾ ಮಹಾಪೀಠವೆಂದು ಪ್ರಸಿದ್ಧವಾಗಿದೆ.

ಈ ಕೂಡ್ಲಿ ಶೃಂಗೇರಿಮಠದ ಶ್ರೀ ಮದ್ರಾಜಗುರು ಶೃಂಗೇರಿ ಶ್ರೀ ನಾರಸಿಂಹಭಾರತಿ ಸ್ವಾಮಿಗಳವರ ಕರ ಕಮಲಸಂಜಾತರಾದ ಶೃಂಗೇರಿ ಶ್ರೀ ಶಂಕರಭಾರತಿ ಸ್ವಾಮಿಗಳಿಗೆ ಹಂಡೆ ಪಾಳೆಯಗಾರ ರಾಮಪ್ಪನಾಯಕರ ಪುತ್ರ ಪವಾಡಪ್ಪನಾಯಕರು ಬರೆದುಕೊಟ್ಟ ಭೂದಾನ ಧರ್ಮಶಾಸನ ಹೀಗಿದೆ : "ಪ್ಲವಂಗ ಕಾರ್ತಿಕ ಶು. ೧೫ ಶಾ. ಶ. ೧೫೮೯ ಅಂದರೆ ಕ್ರಿ. ಶ. ೧೬೬೭ರಂದು ಗ್ರಹಣ ಪುಣ್ಯ ಕಾಲದಲ್ಲಿ ಶ್ರೀ ವಿದ್ಯಾಶಂಕರದೇವರ ದೀಪಾರಾಧನೆಗೆ ಅಲ್ಲಾಪುರವೆಂಬ ಗ್ರಾಮವನ್ನು ಸಕಲ ಸುವರ್ಣಾದಾಯ ಸಹಿರಣ್ಯೋದಕ ಧಾರಾಪೂರ್ವಕ ಗ್ರಾಮಸ್ಥಳ ನಿರ್ದೇಶನ ಮಾಡಿ ಬಿಟ್ಟುಕೊಟ್ಟಿರುವರು."

ಅನಂತರ ೮೦ ವರ್ಷಗಳ ತರುವಾಯ ಈ ಪವಾಡಪ್ಪನಾಯಕನ ಪ್ರಪೌತ್ರ ಪ್ರಸನ್ನಪ್ಪನಾಯಕನ ಪುತ್ರ ಹಂಡೆ ರಾಮಪ್ಪನಾಯಕನು ಅನಂತಪುರ ಬುಕ್ಕರಾಯಸಮುದ್ರ, ಹೊಸಕೆರೆ, ಬುಕ್ಕಪಟ್ಟಣ ಮುಂತಾದ ಸೀಮೆಗಳನ್ನು ಆಳುತ್ತಿದ್ದ ಸಂದರ್ಭದಲ್ಲಿ "ಅಕ್ಷಯ ಜೇಷ್ಠ ಬಹುಳ ಶಾ. ಶ. ೧೬೬೮ ಕ್ರಿ. ಶ. ೧೭೪೬ರ ಸೋಮವಾರ ಪುಣ್ಯಕಾಲ ಶ್ರೀಮಠದ ದೀಪಾರಾಧನೆ, ನೈವೇದ್ಯ ನಡೆವುದಕ್ಕೆ ಹೊಸಕೆರೆ ಸಮೀಪ ಈಚರ್ಲಗ್ರಾಮಕ್ಕೆ ಪ್ರತಿನಾಮ ರಾಮದುರ್ಗದ ಮಜರೆ ಗುಂಟಹಳ್ಳಿ ಎಂಬ ಗ್ರಾಮವನ್ನು ದೇವರ ಪ್ರೀತ್ಯರ್ಥ ದತ್ತಿ ಬಿಟ್ಟು" ಶಾಸನ ಬರೆಯಿಸಿದ್ದಾನೆ. ಈ ದಾನವನ್ನು ಮಠದ ಪಾ. ಗೋವಿಂದಭಟ್ಟರ ವಶಕ್ಕೆ ಕೊಡಲು ಈಚರ್ಲಗ್ರಾಮದ ಪ್ರತಿನಾಮ ರಾಮದುರ್ಗದ ಪೊರೀಶೀನಪ್ಪ ಕಾರಕೂನರೆಡ್ಡಿ ಶ್ಯಾನಭೋಗರಿಗೆ ನಿರೂಪ ಬರೆದುಕಳಿಸಿದ್ದಾನೆ. ಪ್ರಸ್ತುತ ಈ ದಾನ ಸ್ವೀಕರಿಸಿದವರು ಕೂಡ್ಲಿ ಶೃಂಗೇರಿ ಮಠದ ಶ್ರೀ ಶಂಕರಭಾರತಿಗಳವರ ಪ್ರಶಿಷ್ಯ ಶ್ರೀ ಶಂಕರಭಾರತಿಗಳವರು. ಮೇಲೆ ಹೇಳಿದ ೨ ತಾಮ್ರಶಾಸನ ಒಂದು ಸನದುಗಳ ಮೇಲೆ ಮೊಹರಿದ್ದು ಅದರಲ್ಲಿ "ವಿದ್ಯಾಶಂಕರಭಾರತಿ ಶ್ರೀ ಸಿದ್ಧರಾಮೇಶ್ವರ" ಎಂಬ ಒಕ್ಕಣಿಕೆಯಿರುವುದು ವಿಶೇಷವೆನ್ನಿಸಿದೆ.

ಈ ಎರಡೂ ದಾಖಲೆಗಳಿಂದ ಹಂಡೆ ಪಾಳೆಯಗಾರರು ಕೂಡ್ಲಿ ಶೃಂಗೇರಿ ಪೀಠದಲ್ಲಿಟ್ಟ ಅನನ್ಯ ಭಕ್ತಿ ವಿದಿತವಾಗುತ್ತದೆ.

1 ಶ್ರೀ ಮಜ್ಜಗದ್ಗುರು ಶ್ರೀ ಕೂಡ್ಲಿಗಿ ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ ಲೇಖನ ಸಂಗ್ರಹ, ರಜತೋತ್ಸವ ಕಾಣಿಕೆ, ೧೯೬೫